ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವ ನ್ಯಾಯವಾದಿಗಳ ಬಗ್ಗೆ

ಡಾ|| ವೈ. ಎ. ನಾರಾಯಣಸ್ವಾಮಿ(ಶಿಕ್ಷಕರ ಕ್ಷೇತ್ರ) -

507 (659) ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಬಿ.ಡಿ.ಎ., ಕೆ.ಐ.ಎ.ಡಿ.ಬಿ. ಮತ್ತು ಬೃ.ಬೆಂ.ಮ.ಪಾ (ಬಿ.ಬಿ.ಎಂ.ಪಿ) ಈ ಸಂಸ್ಥೆಗಳ ಪ್ಯಾನಲ್‌ಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನ್ಯಾಯವಾದಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು)

(ಆ) ಕಳೆದ 15 ವರ್ಷಗಳಲ್ಲಿ ಕಾರ್ಯನಿರ್ವಹಿಸಿರುವ ನ್ಯಾಯವಾದಿಗಳ ಹೆಸರುಗಳನ್ನು ನೀಡುವುದು;

(ಇ) ಮೇಲ್ಕಂಡ ಸಂಸ್ಥೆಗಳಲ್ಲಿ ಕಳೆದ 15 ವರ್ಷಗಳಿಂದ ಸರ್ಕಾರದ ಪರ ಮತ್ತು ವಿರುದ್ಧ ಬಂದಿರುವ ತೀರ್ಪುಗಳ ಸಂಖ್ಯೆ ಎಷ್ಟು;

(ಈ) ಈ ಧಾವೆಗಳ ಪರ ವಾದಿಸಲು ನ್ಯಾಯವಾದಿಗಳಿಗೆ ಸರ್ಕಾರದಿಂದ ಪಾವತಿಸಲಾದ ಮೊತ್ತ ಎಷ್ಟು; (ವಿವರಗಳನ್ನು ನೀಡುವುದು)

(ಉ) ಸರ್ಕಾರವು ನೇಮಿಸುವ ವಿವಿಧ ನಿಗಮ/ಮಂಡಳಿಗಳಲ್ಲಿ ಇಂತಹ ನ್ಯಾಯವಾದಿಗಳನ್ನು ನೇಮಿಸುವಾಗ ಸಾರ್ವಜನಿಕ ಆಸ್ತಿಯ ರಕ್ಷಣೆ ಹಿತದೃಷ್ಟಿಯಿಂದ ಹೊಸ ಮಾನದಂಡಗಳನ್ನು ರೂಪಿಸಲು ಸರ್ಕಾರವು ಯೋಚಿಸಿದೆಯೇ? (ಮಾಹಿತಿ ನೀಡುವುದು)